


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 18-03-2021 ಪ್ರಶ್ನೆ ಸಂಖ್ಯೆ : 1369(1619)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಪಿ. ಆರ್. ರಮೇಶ್(ನಾಮನಿರ್ದೇಶನ ಹೊಂದಿದವರು )

ಉತ್ತರ ನೀಡಬೇಕಾದ ದಿನಾಂಕ : 18-03-2021

ಉತ್ತರಿಸುವ ಸಚಿವರು: ಮಾನ್ಯ ಸಣ್ಣ ನೀರಾವರಿ ಸಚಿವರು

ವಿಷಯ : ಬೆಂಗಳೂರು ಮಹಾನಗರದಲ್ಲಿ ಅಂತರ್ಜಲ ಮಟ್ಟದ ಸುಧಾರಣೆ ಕುರಿತು

(ಅ) ಬೆಂಗಳೂರು ಮಹಾನಗರ ಕಾರ್ಯವ್ಯಾಪ್ತಿ ಪ್ರದೇಶಗಳಲ್ಲಿ ಕಳೆದ 5 ವರ್ಷಗಳಿಂದ ಅಂತರ್ಜಲ ಮಟ್ಟದ ವಿವರಗಳ ಜೊತೆಗೆ ಸುಧಾರಣೆಗೆ ತೆಗೆದುಕೊಂಡು ಕ್ರಮಗಳ ಕುರಿತು ವಿವರ ನೀಡುವುದು;

(ಆ) ಈ ಪ್ರದೇಶಗಳಲ್ಲಿ ಕಳೆದ 5 ವರ್ಷಗಳಿಂದ ಕರ್ನಾಟಕ ಅಂತರ್‌ಜಲ ಕಾಯ್ದೆ 1999 ರಡಿಯ ಪ್ರಕಾರ ಯಾವುದೇ ಅಧಿಕೃತ ಪ್ರಾಧಿಕಾರದ ಅನುಮತಿ ಪಡೆಯದೆ ಅಂತರ್ಜಲ ಉಪಯೋಗಿಸಿದವರ ವಿರುದ್ದ ಒಟ್ಟು ಎಷ್ಟು ಪ್ರಕರಣಗಳು ದಾಖಲಿಸಲ್ಪಟ್ಟಿವೆ; ಎಷ್ಟು ಪ್ರಕರಣಗಳಲ್ಲಿ ದಂಡ ವಿಧಿಸಲಾಗಿದೆ; ಮತ್ತು ಎಷ್ಟು ಪ್ರಕರಣಗಳಲ್ಲಿ ಇಲಾಖೆಯಿಂದ ಕ್ರಮ ಕೈಗೊಳ್ಳಲಾಗಿದೆ; (ವಿವರ ನೀಡುವುದು)

(ಇ) ಅನಧಿಕೃತ ಬಡಾವಣೆಗಳ ನಿರ್ಮಾಣದಿಂದ ಉದ್ಭವಿಸಿರುವ ಅವೈಜ್ಞಾನಿಕ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯುಳ್ಳ ಬಡಾವಣೆಗಳಿಂದ ಅಂತರ್ಜಲದ ಗುಣಮಟ್ಟ ಕುಸಿಯಲು ಕಾರಣರಾದವರ ವಿರುದ್ದ ಇಲಾಖೆಯಿಂದ ಯಾವ ಕ್ರಮ ಕೈಗೊಳ್ಳಲಾಗಿದೆ; (ಸಂಪೂರ್ಣ ವಿವರ ನೀಡುವುದು)

(ಈ) ಅಧಿಕೃತ/ಅನಧಿಕೃತ ಕಾರ್ಖಾನೆಗಳಿಂದ ಹೊರಬರುವ ಮಲೀನ ನೀರನ್ನು ಸಮರ್ಪಕವಾಗಿ ಸಂಸ್ಕರಿಸದೇ ಅಕ್ಕಪಕ್ಕದ ಕೊಳ್ಳ/ಹಳ್ಳಗಳಿಗೆ ಅನಧಿಕೃತವಾಗಿ ಹರಿಯಬಿಡುವವರ ವಿರುದ್ದ ಇಲಾಖೆಯಿಂದ ಯಾವ ಕ್ರಮ ಕೈಗೊಳ್ಳಲಾಗಿದೆ; (ಸಂಪೂರ್ಣ ವಿವರ ನೀಡುವುದು)

(ಉ) ಬೆಂಗಳೂರು ನಗರದಲ್ಲಿ ಹೊಸದಾಗಿ ಬೋರ್‌ವೆಲ್ ಕೊರತೆಗಳ ಬಗ್ಗೆ ನಿರ್ಭಂಧ ವಿಧಿಸಲಾಗಿದೆಯೇ? (ವಿವರ ನೀಡುವುದು)